


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 1315(1529)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಬಿ. ಕೆ. ಹರಿಪ್ರಸಾದ್(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಮಾನ್ಯ ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು

ವಿಷಯ : ಅಕ್ರಮವಾಗಿ ನೆಲೆಸಿರುವ ವಿದೇಶಿ ವಲಸಿಗರು

(ಅ) ಬೆಂಗಳೂರಿನಲ್ಲಿ ಕಳೆದ ಮೂರು ವರ್ಷಗಳಲ್ಲಿ (2018, 2019 ಮತ್ತು 2020) ವಿವಿಧ ಬಗೆಯ ವೀಸಾ ಮೇಲೆ ಹಾಲಿ ನೆಲೆಸಿರುವ ವಿದೇಶಿ ವಲಸಿಗರ ಸಂಖ್ಯೆ ಎಷ್ಟು; ಯಾವ ಯಾವ ಕಾರಣಗಳಿಗಾಗಿ ಇವರು ಬೆಂಗಳೂರಿನಲ್ಲಿ ನೆಲೆಸಿದ್ದಾರೆ; ವಿದೇಶಿ ವಲಸಿಗರ ನೋಂದಣಿಯನ್ನು ಎಲ್ಲಿ ಮಾಡಿಕೊಳ್ಳಲಾಗುತ್ತಿದೆ; ವಿಮಾನ ನಿಲ್ದಾಣದ ಬಳಿಯೇ ವಿದೇಶಿ ವಲಸಿಗರ ನೋಂದಣಿ ಕೇಂದ್ರ ತೆರೆದು ಬೆಂಗಳೂರಿನಲ್ಲಿ ನೆಲೆಸಲು ಬರುವ ವಿದೇಶಿ ವಲಸಿಗರನ್ನು ನೋಂದಣಿ ಮಾಡಿ ಕ್ರಮಬದ್ಧವಾಗಿ ವಿದೇಶಿ ವಲಸಿಗರ ವಹಿಯನ್ನು (ರಿಜಿಸ್ಟರ್) ನಿರ್ವಹಿಸಲು ಕ್ರಮ ತೆಗೆದುಕೊಳ್ಳಲಾಗುವುದೇ;

(ಆ) ಕಳೆದ ಮೂರು ವರ್ಷಗಳ ಅವಧಿಯಲ್ಲಿ ವೀಸಾ ಅವಧಿ ಮುಗಿದರೂ ಕೂಡಾ ಬೆಂಗಳೂರಿನಲ್ಲಿಯೇ ಅಕ್ರಮವಾಗಿ ನೆಲೆಸಿ ಅಪರಾಧ ಚಟುವಟಿಕೆಗಳಲ್ಲಿ ತೊಡಗಿರುವ ವಿದೇಶಿ ವಲಸಿಗರನ್ನು ಪತ್ತೆಹಚ್ಚಿ ಅವರನ್ನು ಗಡಿಪಾರು ಮಾಡಲು ಕ್ರಮ ಜರುಗಿಸಲಾಗಿದೆಯೇ; ಜರುಗಿಸಿದ್ದಲ್ಲಿ, ಎಷ್ಟು ಪ್ರಕರಣಗಳಲ್ಲಿ ಈ ರೀತಿ ಕ್ರಮ ತೆಗೆದುಕೊಳ್ಳಲಾಗಿದೆ; ವೀಸಾ ಅವಧಿ ಮುಗಿದ ನಂತರ ತಮ್ಮ ದೇಶಗಳಿಗೆ ಮರಳಲು ಅವರಿಗೆ ನೋಟೀಸ್ ನೀಡುವ ಕ್ರಮ ಜರುಗಿಸಲಾಗಿದೆಯೇ;

(ಇ) ಅಕ್ರಮ ಅಪರಾಧ ಚಟುವಟಿಕೆಗಳಲ್ಲಿ ತೊಡಗಿರುವ ವಿದೇಶಿಯರ ಮೇಲೆ ಬೆಂಗಳೂರು ನಗರದ ನ್ಯಾಯಾಲಯದಲ್ಲಿರುವ ಪ್ರಕರಣಗಳ ಸಂಖ್ಯೆ ಎಷ್ಟು; ವಿದೇಶಿ ವಲಸಿಗರ ಅಕ್ರಮ ವಲಸೆ ಹಾಗೂ ನೆಲೆಸುವಿಕೆ ಅಪರಾಧ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ವಿಶೇಷ ತ್ವರಿತ ಕೋರ್ಟ್ ರಚನೆ ಮಾಡಿ ಪ್ರಕರಣಗಳನ್ನು ಬೇಗ ಬಗೆಹರಿಸಿ, ಅಪರಾಧ ಪ್ರಕರಣಗಳಲ್ಲಿ ತೊಡಗಿರುವ ವಿದೇಶಿ ವಲಸಿಗರನ್ನು ಗಡಿಪಾರು ಮಾಡಲು ಕ್ರಮ ಜರುಗಿಸಲಾಗುವುದೇ?